



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 35

ಸಂಪುಟ: ೦೪ ಸಂಚಿಕೆ: ೯ Vol. 04 Issue 9 | ಡಿಸೆಂಬರ್ ೨೦೧೭ December 2017 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/– A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath



ವಿಳಾಸ
ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೪೭೭, ೨೬೬೭೭೭೭೩
ಇಮೇಲ್ : bmsritrust@gmail.com
web: www.bmshri.org

ದಿನಾಂಕ ೨೯–೧೦–೨೦೧೭ ಭಾನುವಾರ

## ಶಾ.ಬಾಲೂರಾವ್ ಅನುವಾದ ಪ್ರಶಸ್ತಿ ಮತ್ತು ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿ ಪ್ರದಾನ ಸಮಾರಂಭ



ಶ್ರೀಮತಿ ಕಮಲಿನಿ ಬಾಲೂರಾವ್ ಅವರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಮೇಲೆ ಕಾಣಿಸಿದ ಎರಡೂ ಪ್ರಶಸ್ತಿಗಳನ್ನು ಪ್ರತಿ ವರ್ಷವೂ ಅವರ ಪತಿ ದಿ|| ಶಾ. ಬಾಲೂರಾವ್ ಹೆಸರಿನಲ್ಲಿ ನೀಡಲಾಗುತ್ತಿದ್ದು ೨೦೧೬ನೇ ಸಾಲಿನ ಪ್ರಶಸ್ತಿಗಳನ್ನು ದಿನಾಂಕ ೨೯–೧೦–೨೦೧೭ನೇ ಭಾನುವಾರದಂದು ಪ್ರಶಸ್ತಿಪ್ರದಾನ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಶಾ. ಬಾಲೂರಾವ್ ಅನುವಾದ ಪ್ರಶಸ್ತಿಗೆ, ಖ್ಯಾತ ಅನುವಾದಕರೂ, ಪತ್ರಕರ್ತರೂ ಆಗಿರುವ ಶ್ರೀ ಬಿ.ಎಸ್. ಜಯಪ್ರಕಾಶ್‌ನಾರಾಯಣ ಮತ್ತು ಶಾ. ಬಾಲೂರಾವ್ ಯುವಬರಹಗಾರ ಪ್ರಶಸ್ತಿಗೆ ಯುವ ಕವಿಗಳೂ ರಂಗಕರ್ಮಿಗಳೂ ಆದ ಶ್ರೀ ಬೇಲೂರು ರಘುನಂದನ್ ಅವರು ಭಾಜನರಾಗಿದ್ದರು. ಪ್ರಶಸ್ತಿ ಪುರಸ್ಕೃತರಾದ ಇಬ್ಬರೂ ಪ್ರತಿಭಾವಂತ ಲೇಖಕರಾಗಿದ್ದು, ಈಗಾಗಲೇ ಹತ್ತಾರು ಪುರಸ್ಕಾರಗಳನ್ನು ಗಳಿಸಿ ಹೆಸರಾಗಿದ್ದಾರೆ.

ಈ ಪ್ರಶಸ್ತಿಗಳಿಗೆ ಆಯ್ಕೆ ಸಮಿತಿಯ ವಿದ್ವಾಂಸರು;

ಡಾ. ಕಾಂತರಾಜ ಸುರೇಶ್ , ತಲಘಟ್ಟಪುರ, ಸಂಯುಕ್ತಾ ಪುಲಿಗಲ್, ಅಂಬರೀಶ್ ಸಮರ್ಥವಾದ ರೀತಿಯಲ್ಲಿ ಪುರಸ್ಕೃತರನ್ನು ಆಯ್ಕೆಮಾಡಿ, ಸಹಕರಿಸಿರುತ್ತಾರೆ.

ಅನುವಾದ ಪುರಸ್ಕಾರಕ್ಕೆ ಆಯ್ಕೆಯಾದ 'ಸುಸ್ವರ ಸುಬ್ಬಲಕ್ಷ್ಮಿ' ಅನುವಾದ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯಾಗಿದೆ.

ಯುವಬರಹಗಾರ ಪ್ರಶಸ್ತಿಗೆ ಆಯ್ಕೆಯಾದ 'ಜೀವನ್ಮುಖಿ ತೀಸ್ತಾ: ಅಸ್ಸಾಮ್' ಪ್ರವಾಸ ಕಥನವಾಗಿದ್ದು ಒಂದು ರೀತಿಯಲ್ಲಿ ಸಾಂಸ್ಕೃತಿಕ ಅಧ್ಯಯನವೂ ಆಗಿ ಮೌಲಿಕವೆನಿಸಿದೆ.

ಈ ಪ್ರಶಸ್ತಿ ಪ್ರದಾನ ಸಮಾರಂಭದ ಅಧ್ಯಕ್ಷತೆಯನ್ನು ಡಾ.ಓ.ಎಲ್. ನಾಗಭೂಷಣ ಸ್ವಾಮಿಯವರು ವಹಿಸಿದ್ದು, ಪ್ರಶಸ್ತಿ ಪ್ರದಾನವನ್ನು ಮಾಡಿ, ಎರಡೂ ಕೃತಿಗಳಲ್ಲಿನ ಮೌಲಿಕ ಅಂಶಗಳ ಬಗ್ಗೆ ಬೆಳಕು ಚೆಲ್ಲಿದರು.



ಡಾ. ಪಿ.ವಿ.ನಾರಾಯಣ ಅವರು ಸ್ವಾಗತವನ್ನು ಮಾಡಿ ಶಾ.ಬಾಲೂರಾವ್ ಅವರ ವಿಚಾರವನ್ನು ಮತ್ತು ಪ್ರಶಸ್ತಿಗಳ ಬಗೆಗಿನ ವಿವರಗಳನ್ನು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ನೀಡಿದರು. ಡಾ. ವಿಜಯಾ ಸುಬ್ಬರಾಜ್ ವಂದನಾರ್ಪಣೆ ಸಲ್ಲಿಸಿದರು.

## ಸಂಪಾದಕೀಯ

ಬಿಎಂಶ್ರೀ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ನಾವಿನ್ಯತೆ ಕಾಣಲು ನಮಗೆಲ್ಲ ಆಸಕ್ತಿ ಇದೆ. ೨೦೧೮ನೇ ಸಾಲಿನ ಪ್ರಾರಂಭದಿಂದ ಹೊಸ ಹೊಸ ಕಾರ್ಯಕ್ರಮಗಳನ್ನು ನಡೆಸುವ ನಿಟ್ಟಿನಲ್ಲಿ ನಾವು ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದೇವೆ. ಹಾಗೆಯೇ ಗ್ರಂಥಾಲಯದಲ್ಲಿ ಸೂಕ್ತ ಸುಧಾರಣೆಗಳನ್ನು ಹಾಗೂ ಹಸ್ತ ಪ್ರತಿ ವಿಭಾಗದ ಚಟುವಟಿಕೆಗಳಲ್ಲಿ ಹೊಸ ನಾವಿನ್ಯತೆಗಳನ್ನು ನಾವೆಲ್ಲರೂ ಕಾಣಬಹುದು.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

**ಬಿ.ಆರ್ ರವೀಂದ್ರನಾಥ್**
ಸಂಪಾದಕರು......

### ಡಿಸೆಂಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ದೇವುಡು | ೨೭-೧೨-೧೮೯೭ |
| ಎಸ್.ವಿ. ರಂಗಣ್ಣ | ೨೪-೧೨-೧೮೯೮ |
| ಕುವೆಂಪು | ೨೯-೧೨-೧೯೦೪ |
| ಜಿ.ಪಿ.ರಾಜರತ್ನಂ | ೫-೧೨-೧೯೦೮ |
| ಜಯಲಕ್ಷ್ಮಿ ಶ್ರೀನಿವಾಸನ್ | ೧೨-೧೨-೧೯೧೧ |
| ಶಾಂತಾದೇವಿ ಮಾಳವಾಡ | ೧೦-೧೨-೧೯೨೨ |
| ವ್ಯಾಸರಾಯ ಬಲ್ಲಾಳ | ೧-೧೨-೧೯೨೩ |
| ಅನಸೂಯ ರಾಮರೆಡ್ಡಿ | ೨೫-೧೨-೧೯೨೯ |
| ಯು ಆರ್. ಅನಂತಮೂರ್ತಿ | ೨೧-೧೨-೧೯೩೩ |
| ಕಾಕೋಳು ಸರೋಜಾರಾವ್ | ೩೧-೧೨-೧೯೪೨ |

### ಡಿಸೆಂಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಫರ್ಡಿನಾಂಡ್ ಕಿಟಲ್ | ೧೯-೧೨-೧೯೦೩ |
| ಆರ್. ನರಸಿಂಹಚಾರ್ | ೬-೧೨-೧೯೩೬ |
| ಶಿಶಿ ಬಸವನಾಳ | ೨೨-೧೨-೧೯೫೧ |
| ಮಿರ್ಜಿಅಣ್ಣಾರಾಯ | ೨೩-೧೨-೧೯೭೫ |
| ವಾಣಿ(ಸುಬ್ಬಮ್ಮ) | ೦೧-೧೨-೧೯೮೮ |
| ಜಿ.ಬಿ. ಜೋಶಿ | ೨೫-೧೨-೧೯೯೩ |
| ಹೆಚ್ ವಿ ಸಾವಿತ್ರಮ್ಮ | ೨೭-೧೨-೧೯೯೫ |
| ಶಿವರಾಮ ಕಾರಂತ | ೯-೧೨-೧೯೯೭ |
| ಶೈಲಜಾ ಉಡಚಣ | ೦೬-೧೨-೨೦೧೦ |

## ಆಧುನಿಕ ವಚನಗಳು

-ಜಿ. ಅಬ್ದುಲ್ ಬಷೀರ್

**ಚುನಾವಣೆ ಚಿತಾವಣೆ**
**ಭ್ರಷ್ಟಾಚಾರ ಅನಾಚಾರ**
**ಅವಿಚಾರ ಅತ್ಯಾಚಾರ**
**ಈ ದುರಾಚಾರಗಳ ನಡುವೆ ಸಿಲುಕಿ**
**ಹಣ್ಣು ಹಣ್ಣಾಗುವ ಮಾನವನನೇನೆಂಬೆ**
**'ಅಲ್ಲಾರಖಾ'!** ॥೨೮॥

## ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನವು 37 ವರ್ಷಗಳಿಂದ ಸಾವಿರಾರು ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವಿರತವಾಗಿ ಸಕ್ರಿಯವಾಗಿರುತ್ತದೆ. ಬಿಎಂಶ್ರೀ ಪ್ರತಿಷ್ಠಾನವು ನಡೆದು ಬಂದ ದಾರಿಯನ್ನು ದಾಖಲಿಸಿ ಸಾಧನೆಗಳನ್ನು ಗುರುತಿಸಿ ಇದನ್ನು ಸಾಧ್ಯಗೊಳಿಸಿದ ಹಲವಾರು ಮಹನೀಯರ ಕೊಡುಗೆಗಳನ್ನು ಸ್ಮರಿಸಿಕೊಳ್ಳುವ ಕಾರ್ಯವನ್ನು ಕೈಗೊಳ್ಳಲು ಪ್ರತಿಷ್ಠಾನವು ಚಿಂತನೆ ನಡೆಸುತ್ತಿದೆ. ಇಂತಹ ಬೃಹತ್ ಕಾರ್ಯವನ್ನು ಸಾಧಿಸಲು ಪ್ರತಿಷ್ಠಾನದ ಜೊತೆ ಕೈಗೂಡಿಸಿ ಕೆಲಸ ಮಾಡುವಂತಹ ಸ್ವಯಂಪ್ರೇರಿತರು ಬೇಕಾಗಿರುತ್ತಾರೆ. ಈ ಮಹತ್ವದ ಕಾರ್ಯದಲ್ಲಿ ಭಾಗವಹಿಸುವಂತೆ ಎಲ್ಲ ಸದಸ್ಯರನ್ನೂ ನಮಗೆ ಬೆಂಬಲ ನೀಡಬೇಕೆಂದು ಕೋರುತ್ತವೆ. ಆಸಕ್ತರು ದಯವಿಟ್ಟು ಸಂಪರ್ಕಿಸಿ: ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು

## ಪ್ರಕಟಣೆ

### 2016ನೇ ಸಾಲಿನ ಸಾರಂಗಿ ವೆಂಕಟರಾಮಯ್ಯ– ಪುಟ್ಟಚ್ಚಮ್ಮ ಸ್ಮಾರಕ ದತ್ತಿ ಸ್ಪರ್ಧೆ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಶ್ರೀಎಸ್.ವಿ. ಶ್ರೀನಿವಾಸರಾವ್ ಅವರು ಸ್ಥಾಪಿಸಿರುವ ದಿ॥ ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ದತ್ತಿ ನಿಧಿ ಪ್ರಶಸ್ತಿಯಡಿ 2016ನೇ ಸಾಲಿನ ದತ್ತಿ ಸ್ಪರ್ಧೆಗೆ 2016ನೇ ಸಾಲಿನಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟಗೊಂಡಿರುವ ನಾಟಕವನ್ನು ಆಹ್ವಾನಿಸಲಾಗಿದೆ. ನಾಟಕದ 2 ಪ್ರತಿಗಳನ್ನು ದಿನಾಂಕ : 05, ಡಿಸೆಂಬರ್, 2017ರೊಳಗೆ ಮೇಲ್ಕಂಡ ವಿಳಾಸಕ್ಕೆ ಕಳುಹಿಸಲು ಕೋರಿಕೆ.

ಪ್ರಶಸ್ತಿಯ ಮೊತ್ತ 3,000/–ರೂ.ಗಳು ಹಾಗೂ ಪ್ರಶಸ್ತಿ ಪತ್ರವನ್ನು ವಿಶೇಷ ಸಮಾರಂಭದಲ್ಲಿ ವಿತರಿಸಲಾಗುವುದು.

## ಕನ್ನಡ ಹಳಗನ್ನಡ ತರಗತಿಗಳ ಧ್ವನಿಮುದ್ರಿಕೆಗಳು ಲಭ್ಯ

ಇದೀಗ ಪ್ರಾರಂಭಗೊಂಡಿರುವ 6 ತಿಂಗಳ ಹಳಗನ್ನಡ ಡಿಪ್ಲೋಮೊ ತರಗತಿಗಳಲ್ಲಿ ವಿದ್ವಾಂಸರು ನೀಡುವ ಉಪನ್ಯಾಸಗಳ ಧ್ವನಿಮುದ್ರಿಕೆಗಳು ಈ ತರಗತಿಗಳ ವಿದ್ಯಾರ್ಥಿಗಳಿಗೆ ಲಭ್ಯಗೊಳಿಸುವ ಸೌಲಭ್ಯವನ್ನು ಪ್ರತಿಷ್ಠಾನವು ಒದಗಿಸುತ್ತಿದೆ. ತರಗತಿಗಳಿಗೆ ಹಾಜರಾಗದ ವಿದ್ಯಾರ್ಥಿಗಳು ಹಾಗೂ ಉಪನ್ಯಾಸಗಳನ್ನು ಮತ್ತೊಮ್ಮೆ ಮನನ ಮಾಡಿಕೊಳ್ಳುವ ಆಸಕ್ತಿ ಇರುವ ವಿದ್ಯಾರ್ಥಿಗಳ ಬಳಕೆಗಾಗಿ ಪ್ರತಿಷ್ಠಾನವು ಈ ಸೌಲಭ್ಯವನ್ನು ನೀಡಲಾಗುತ್ತಿದೆ.ಈ ಸೌಲಭ್ಯವನ್ನುಉಚಿತವಾಗಿ ನೀಡಲಾಗುತ್ತಿದೆ.

ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿ.

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/– (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/– ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

## ಡಿಸೆಂಬರ್ ೨೦೧೭ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ**



### ೦೬-೧೨-೨೦೧೭ ಬುಧವಾರ ಸಂಜೆ ೬-೦೦ ಗಂಟೆಗೆ

**ಗಮಕವಾಹಿನಿ-೨೩**

'ಪಂಪಭಾರತ' ಸಂಚಿಕೆ- ೧೦ (ಮುಂದುವರೆದ ಭಾಗ)

ವಾಚನ : ಕು|| ರಂಜನಿ

ವ್ಯಾಖ್ಯಾನ : ಡಾ. ಸುಷ್ಮಾ ರಘುನಂದನ್

ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ



### ೧೧-೧೨-೨೦೧೭ ಸೋಮವಾರ ಸಂಜೆ- ೬-೦೦ ಗಂಟೆಗೆ

**ಕನ್ನಡ ಸಂಸ್ಕೃತಿ ದರ್ಶನ**

(ಸಾಕ್ಷ್ಯಚಿತ್ರ ಪ್ರದರ್ಶನ)



### ೧೫-೧೨-೨೦೧೭ ಶುಕ್ರವಾರ ಸಂಜೆ – ೬-೦೦ ಗಂಟೆಗೆ

**"ಅಕ್ಕರಗೊಟ್ಟಿ"**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : 'ಪಂಪಭಾರತ' ೧೨ ನೇ ಆಶ್ವಾಸ, ೨೮ ನೇ ಪದ್ಯ,

ಚಾಲನೆ : ಡಾ|| ಎಚ್. ಶಶಿಕಲಾ



### ೧೭-೧೨-೨೦೧೭ ಭಾನುವಾರ ಬೆಳಿಗ್ಗೆ – ೧೦-೩೦ರಿಂದ ೪-೩೦ರವರೆಗೆ

**ಎಂ.ಎ. ರಾಮಾನುಜ ಐಯ್ಯಂಗಾರ್ ದತ್ತಿ ಮತ್ತು ಪ್ರೊ. ಬಿ.ರಾಮಸ್ವಾಮಿ ದತ್ತಿ**

ವಿಚಾರ ಸಂಕಿರಣ-ಆಧುನಿಕ ಪೂರ್ವ ಗದ್ಯ ಸಾಹಿತ್ಯ

ವಿವರಗಳಿಗೆ ಈ ಪುಟದ ಕೊನೆಯಲ್ಲಿ ನೋಡಿ.

### ೨೨-೧೨-೨೦೧೭ ಶುಕ್ರವಾರ ಸಂಜೆ ೬-೦೦ ಗಂಟೆಗೆ

**ಬೇಟೆರಾಯ ದೀಕ್ಷಿತ , ವಿ.ಸೀ, ಶಾಂತಾ ಪ್ರಭುಶಂಕರ, ವೆಂಕಟರಂಗಪ್ಪ
ಟಿ.ಎನ್. ಮಹದೇವಯ್ಯ, ಜಿ.ಪಿ. ರಾಜರತ್ನಂ, ರಾಮಚಂದ್ರ ಪಟವಾರಿ,
ಚಂದ್ರ ಶೇಖರ್ ಶರ್ಮ, ಎಸ್. ಶ್ರೀಕಂಠಯ್ಯ ದತ್ತಿಗಳು
ಉಪನ್ಯಾಸ ಮತ್ತು
ಪುಟ್ಟಚ್ಚಮ್ಮ ಸಾರಂಗಿ ವೆಂಕಟರಾಮಯ್ಯ- ಪುಸ್ತಕ ಬಹುಮಾನ**

ವಿಷಯ : ಪ್ರಭುಲಿಂಗಲೀಲೆ

ಉಪನ್ಯಾಸಕರು : ಡಾ. ಸಿ.ಯು. ಮಂಜುನಾಥ

(ನಿವೃತ್ತ ಪ್ರಿನ್ಸಿಪಾಲರು, SJRC ಕಾಲೇಜು)

### ದಿನಾಂಕ ೧೭-೧೨-೨೦೧೭ರ ಕಾರ್ಯಕ್ರಮದ ವಿವರಗಳು

**ಆಧುನಿಕ ಪೂರ್ವ ಕನ್ನಡ ಗದ್ಯ**

| | | | |
|---|---|---|---|
| ೧. | ೧೦-೪೫ ರಿಂದ ೧೧-೩೦ರವರಗೆ | ಶಾಸನಗದ್ಯ : | ಡಾ|| ದೇವರ ಕೊಂಡಾರೆಡ್ಡಿ. |
| ೨. | ೧೧-೩೦ ರಿಂದ ೧೨-೧೫ರವರಗೆ | 'ವಡ್ಡಾರಾಧನೆ' 'ಚಾವುಂಡರಾಯ ಪುರಾಣ' | ಡಾ|| ಎಚ್.ಎಸ್. ಭುವನೇಶ್ವರ |
| ೩. | ೧೨-೧೫ ರಿಂದ ೧-೦೦ರವರಗೆ | ಚಂಪೂ ಕಾವ್ಯಗಳ ಗದ್ಯ | ಡಾ|| ಕೆ.ಆರ್. ಗಣೇಶ್ |
| | **೧-೦೦ ರಿಂದ ೨-೦೦** | **ಊಟದ ಸಮಯ** | |
| ೪. | ೨-೦೦ ರಿಂದ ೨-೪೫ರವರಗೆ | 'ಧರ್ಮಾಮೃತ' 'ಪಂಚತಂತ್ರ'ಗಳ ಗದ್ಯ | ಡಾ|| ಎಸ್.ಎಲ್. ಮಂಜುನಾಥ್ |
| ೫. | ೨-೪೫ ರಿಂದ ೩-೩೦ರವರಗೆ | ಹರಿಹರನ ರಗಳೆಗಳ ಗದ್ಯಡಾ. | ಡಾ|| ಆರ್. ಲಕ್ಷ್ಮೀನಾರಾಯಣ |
| ೬. | ೩-೩೦ ರಿಂದ ೪-೧೫ರವರಗೆ | ಒಡೆಯರ್ ಕಾಲದ ಗದ್ಯ | ಡಾ|| ಎನ್.ಆರ್. ಲಲಿತಾಂಬ |
| | **೪-೧೫ ರಿಂದ ೪-೩೦** | **ಕಾಫಿ ಸಮಯ** | |

# ಬಿ.ಎಂ.ಶ್ರೀ ಸ್ಮಾರಕದಲ್ಲಿ ನವೆಂಬರ್ 2017 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು

### ೮-೧೧-೨೦೧೭
### ಗಮಕವಾಹಿನಿ-ಮಾಲೆ -೨೨




ಪಂಪಭಾರತ ಸಂಚಿಕೆ -೯ (ಮುಂದುವರೆದ ಭಾಗ)

ವಾಚನ: ಕುಮಾರಿ। ವರ್ಣಿಕಾ

ವ್ಯಾಖ್ಯಾನ : ಶ್ರೀಮತಿ ನಂ. ನಾಗಲಕ್ಷ್ಮಿ

ನೇತೃತ್ವ : ಶ್ರೀಮತಿ ಪಿ.ವಿ. ಶ್ರೀಮತಿ ಗಮಕ ಕಲಾ ಪ್ರತಿಷ್ಠಾನ

ಪಂಪಭಾರತ ಸಂಗ್ರಹ :ಡಾ॥ ಪಿ.ವಿ. ನಾರಾಯಣ

ಕುಮಾರಿ ವರ್ಣಿಕಾ, ಆರನೇ ತರಗತಿಯ ವಿದ್ಯಾರ್ಥಿನಿ. ಧೈರ್ಯದಿಂದ ಹಳಗನ್ನಡ ಕಾವ್ಯವನ್ನು ವಾಚನಮಾಡುವ ಅವಳ ಸಾಹಸ ಮೆಚ್ಚ ಬೇಕಾದ್ದುದೇ. ಖಾಂಡವ ದಹನದ ಮುಂದಿನ ಪ್ರಕರಣಗಳನ್ನು ಬಹಳ ಸುಶ್ರಾವ್ಯವಾಗಿ, ಎತ್ತರದ ದನಿಯಲ್ಲಿ ಹಾಡಿ ಎಲ್ಲರ ಮೆಚ್ಚುಗೆಗೆ ಪಾತ್ರವಾದದ್ದು ಒಂದು ವಿಶೇಷ. ವಾಖ್ಯಾನಕಾರರಾದ ಶ್ರೀಮತಿ ನಾಗಲಕ್ಷ್ಮಿಯವರು ರಾಜಸೂಯ ಯಾಗ ಅಗ್ರಪೂಜಾ ಪ್ರಸಂಗ, ಶಿಶುಪಾಲವಧಾ ಪ್ರಸಂಗ, ಪಾಂಡವರನ್ನು ಜೂಜಿಗೆ ಆಹ್ವಾನಿಸಿದ ಪ್ರಕರಣ, ವಸ್ತ್ರಾಪಹರಣ ಸನ್ನಿವೇಶ, ವನವಾಸಕ್ಕೆ ತೆರಳಿದ ಪ್ರಸಂಗಗಳನ್ನು ಸಂದರ್ಭೋಚಿತವಾಗಿ ವ್ಯಾಖ್ಯಾನಿಸಿ, ಗಮಕಾಸಕ್ತರ ಮೆಚ್ಚುಗೆಗೆ ಪಾತ್ರರಾದರು. ಕಲಾಕಾರರನ್ನು ಅಧ್ಯಕ್ಷರು ಡಾ॥ ಪಿ.ವಿ. ನಾರಾಯಣ ಅವರು ಸಭೆಗೆ ಪರಿಚಯಮಾಡಿಕೊಟ್ಟರು.

ಡಾ॥ ವಿಜಯಾ ಸುಬ್ಬರಾಜ್ ಕಾರ್ಯದರ್ಶಿಗಳು ವಂದನೆ ಸಲ್ಲಿಸಿ, ಕಲಾಕಾರಿಗೆ ನೆನಪಿನ ಕಾಣಿಕೆಗಳನ್ನು ನೀಡಿದರು.

### ೧೫-೧೧-೨೦೧೭ಬುಧವಾರ ಸಂಜೆ- ೬-೦೦ಗಂಟೆಗೆ "ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ನಾಗರ ಎಲ್ಲಮ್ಮ-ಒಂದು ವಿಶ್ಲೇಷಣೆ

ಚಾಲನೆ : ಡಾ॥ ರಾಜಶ್ರೀ ಕಿಶೋರ

ವಿಷಯ: 'ನಾಗರ ಎಲ್ಲಮ್ಮ' ಒಂದು ವಿಶ್ಲೇಷಣೆ

ಚಾಲನೆ ನೀಡಿದವರು : ಡಾ॥ ರಾಜಶ್ರೀ ಕಿಶೋರ

"ಅಕ್ಕರಗೊಟ್ಟಿ" ಕಾರ್ಯಕ್ರಮ ಒಂದು ಮುಕ್ತ ಸಂಸ್ಕೃತಿ ಚಿಂತನೆಯ ವೇದಿಕೆಯಾಗಿ, ಕೇವಲ ಸಾಹಿತ್ಯಕ ವಿಷಯಗಳಿಗೆ ಸೀಮಿತವಾಗಿಲ್ಲ. ಇಲ್ಲಿ ನಾಡಿಗೆ ಸಂಬಂಧಪಟ್ಟ ನಾಡು,ನುಡಿ, ಜನಪದ, ಪರಂಪರೆ, ಸಂಸ್ಕೃತಿ, ಪುರಾತತ್ವ, ಪ್ರಾಚೀನ ಇತಿಹಾಸ, ಭೂಗೋಳಿಖ, ಸಾಮಾಜಿಕ, ಶಾಸನ, ಹಸ್ತಪ್ರತಿ, ತಂತ್ರಾಂಶಗಳ ಬಳಕೆ, ಹೀಗೆ ಹಲವಾರು ವಿಷಯಗಳ ಬಗ್ಗೆ ಮುಕ್ತ ಚಿಂತನೆಗೆ, ಮತ್ತು ಚರ್ಚೆಗೆ ತೆರೆದುಕೊಳ್ಳುವ ವೇದಿಕೆ. ಇದು ಉಪನ್ಯಾಸ. ಕಾರ್ಯಕ್ರಮವಲ್ಲ. ಚರ್ಚಿಸುವ ವಿಷಯದ ಬಗ್ಗೆ ಚಾಲನೆ ನೀಡಿ, ಚರ್ಚೆಗೆ ಮುಕ್ತ ಅವಕಾಶ ಕಲ್ಪಿಸುವ ಕಾರ್ಯಕ್ರಮವಿದು.




ದಿನಾಂಕ ೧೫ನವೆಂಬರ್ ೨೦೧೭ರಂದು ಡಾ॥ ರಾಜಶ್ರೀ ಕಿಸೋರ ಅವರು ಚರ್ಚೆಗೆ ಚಾಲನೆ ನೀಡಿದ ವಿಷಯ ರಾಯಚೂರು ಜಿಲ್ಲೆಯ ದೇವಸೂಗೂರಿನ ಗ್ರಾಮ ದೇವತೆ "ನಾಗರ ಎಲ್ಲಮ್ಮ"- ಒಂದು ವಿಶ್ಲೇಷಣೆ.

ಎಲ್ಲಾ ದೈವಗಳ ಮೂಲವು ಜನಪದವೇ ಋಗ್ವೇದ ಕಾಲದಿಂದಲೂ ಭೂಮಿ ಮತ್ತು ಸ್ತ್ರೀಯನ್ನು ಫಲವಂತಿಕೆಯ ಸಂಕೇತವೆಂದೇ ಪರಿಗಣಿಸಿ ಸ್ತ್ರೀ ಆರಾಧನೆಯ ಮಹತ್ವ, ನಾಗಾರಾಧನೆಯಿಂದು ಸಂತಾನ ಸಿದ್ಧಿಯಾಗುವುದೆಂಬ ಕಲ್ಪನೆ, ಮಾತೃ ಪ್ರಾಧ್ಯಾನ್ಯತೆ, ಹೀಗೆ ಇವೆಲ್ಲವೂ ಸ್ತ್ರೀ ಆರಾಧನೆಯ ವಿವಿಧ ಆಯಾಮಗಳನ್ನು ಸೂಚಿಸುತ್ತದೆ. ತಮ್ಮ ಚರ್ಚೆಯಲ್ಲಿ ಸಪ್ತ ಮಾತೃಕೆಯರ ಆರಾಧನೆ, ನಾಗಾರಾಧನೆ, ಮಾತೃತ್ವದ ಹಿರಿಮೆಯನ್ನೂ ವಿವರಿಸಿದರು. ಸೂಗೂರಿನ ಸ್ಥಳ ನಾಮದ ನಿಷತ್ತಿ, ಅಲ್ಲಿ ಎಲ್ಲಮ್ಮಳು ನಾಗರ ರೂಪದಲ್ಲಿ ಪೂಜೆಗೊಳ್ಳುತ್ತಿರುವ ಸಂಪ್ರದಾಯವನ್ನು ಸೂಚಿಸಿದ್ದಾರೆ. ಎಲ್ಲರಿಗೂ ಅಮ್ಮ "ಎಲ್ಲಮ್ಮ", ಕ್ಷೇತ್ರ ಪಾಲಿನಿ ಎಂಬರ್ಥದಲ್ಲಿ "ಎಲೆಯಮ್ಮ" ಎಂಬ ಪರ್ಯಾಯ ಚಿಂತನೆಗಳೂ ಸಭೆಯಲ್ಲಿ ವ್ಯಕ್ತವಾಯಿತು. ಶ್ರೀ ಗೋಪಾಲ ಸ್ವಾಮಿ ಶ್ರೀ ವಿಜಯೇಂದ್ರ, ಡಾ॥ ವಿಜಯಾ ಸುಬ್ಬರಾಜ್, ಶ್ರೀಮತಿ ನಳಿನಾ ಮುಂತಾದವರು ಚರ್ಚೆಯಲ್ಲಿ ಆಸಕ್ತಿಯಿಂದ ಪಾಲ್ಗೊಂಡಿದ್ದರು.

ಕಾರ್ಯಕ್ರಮದ ಪ್ರಾರಂಭದಲ್ಲಿ ರಾಯಚೂರು ಜಿಲ್ಲೆಯ ಕವಿತಾಳ ಗ್ರಾಮದವರಾದ ಶ್ರೀಮತಿ.ಡಾ.ರಾಜಶ್ರೀ ಕಿಶೋರ ಅವರನ್ನು ಡಾ. ಪಿ.ವಿ.ನಾರಾಯಣ ಅವರು ಸಭೆಗೆ ಪರಿಚಯ ಮಾಡಿಕೊಟ್ಟು ಚರ್ಚೆಗೆ ಆಗಮಿಸಿದ ಸಭಿಕರನ್ನು ಸ್ವಾಗತಿಸಿದರು.

ಡಾ॥ ವಿಜಯಾ ಸುಬ್ಬರಾಜ್ ವಂದನಾರ್ಪಣೆ ಮಾಡಿದರು.

### ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ-(ಸಾಕ್ಷ್ಯಚಿತ್ರ ಪ್ರದರ್ಶನ)

ದಿನಾಂಕ ೨೦ನೇ ನವೆಂಬರ್ ೨೦೧೭ರಂದು ಪೂರ್ಣಚಂದ್ರ ತೇಜಸ್ವಿ ಹಾಗೂ ಕೃಷ್ಣ ಆಲನಹಳ್ಳಿ ಅವರುಗಳ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

## ತೀ.ನಂ.ಶ್ರೀ ಸ್ಮಾರಕ ಉಪನ್ಯಾಸ ದತ್ತಿ.
## ದತ್ತಿದಾನಿಗಳು : ಶ್ರೀಮತಿ ವಿ. ಅಮೃತಾ

ಶ್ರೀಮತಿ. ವಿ. ಅಮೃತಾ, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಶ್ರೀ ವೆಂಕಟಗಿರಿಯಪ್ಪ ಮತ್ತು ಶ್ರೀಮತಿ ವೆಂಕಟಲಕ್ಷ್ಮಮ್ಮ ಅವರ ಸುಪುತ್ರಿಯಾಗಿ ಮೈಸೂರಿನಲ್ಲಿ 1935 ಸೆಪ್ಟಂಬರ್ 15ರಂದು ಜನಿಸಿದರು. ತಂದೆ ವೆಂಟಗಿರಿಯಪ್ಪನವರು ಆಸ್ಥಾನ ವೀಣಾ ವಿದ್ವಾಂಸರು. ವೀಣೆ ಶೇಷಣ್ಣನವರ ಸಮಕಾಲೀನರು. ಮಹಾರಾಜಾ ಕಾಲೇಜು, ಮೈಸೂರಿನಲ್ಲಿ 1958ರಲ್ಲಿ ಎಂ.ಎ.ಪದವಿಯನ್ನು ಗಳಿಸಿ, ಉಪನ್ಯಾಸ ವೃತ್ತಿಯನ್ನು ತುಮಕೂರಿನಲ್ಲಿ ಆರಂಭಿಸಿ, ನಂತರ ಹಾಸನ, ಮೈಸೂರು, ಆರ್. ಸಿ. ಕಾಲೇಜು ಬೆಂಗಳೂರು ಮತ್ತು ಮಹಾರಾಣಿ ಕಾಲೇಜು ಬೆಂಗಳೂರಿನಲ್ಲಿ ಸೇವೆ ಸಲ್ಲಿಸಿ, ಪ್ರಾಧ್ಯಾಪಕರಾಗಿ ನಿವೃತ್ತಿ ಹೊಂದಿ, ಈಗ ವಿಶ್ರಾಂತ ಜೀವನವನ್ನು ಅನುಭವಿಸುತ್ತಿದ್ದಾರೆ. ಮೈಸೂರಿನ ಮೂವತ್ತಾರು ವೀಣಾ ವಿದ್ವಾಂಸರ ಪರಿಚಯ ಕೃತಿ "ವಿಪಂಚಿ ವೈಭವ" ವೆಂಬ ಕೃತಿಯನ್ನು 2010ರಲ್ಲಿ ಪ್ರಕಟಿಸಿದ್ದಾರೆ.

ತೀನಂಶ್ರೀ ಅವರ ಶಿಷ್ಯೆಯಾಗಿದ್ದ ಶ್ರೀಮತಿ ಅಮೃತಾ ಅವರು, ತೀನಂಶ್ರೀಯವರ ವ್ಯಕ್ತಿತ್ವ, ಪ್ರತಿಭೆ, ಭಾಷಾವಿಜ್ಞಾನದಲ್ಲಿನ ಅವರ ಪಾಂಡಿತ್ಯ, ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತಭಾಷಾ ಸಾಹಿತ್ಯಗಳಲ್ಲಿ ಅವರ ಅಪಾರವಾದ ಜ್ಞಾನ, ಮೇಲಾಗಿ ಕನ್ನಡ ಎಂ.ಎ. ತರಗತಿಗಳಿಗೆ ಪಠ್ಯಕ್ರಮಗಳನ್ನು ರೂಪಿಸುವಲ್ಲಿ ಅವರ ದಾರ್ಶನಿಕತ್ವಗಳಿಂದ ಅತ್ಯಂತ ಪ್ರಭಾವಕ್ಕೊಳಗಾದವರಲ್ಲಿ ಆಶ್ಚರ್ಯವೇನಿಲ್ಲ. ಇಂತಹ ಮಹನೀಯರ ಜೀವನ ಮತ್ತು ಸಾಹಿತ್ಯ ಸಾಧನೆ ಕಿರಿಯರಿಗೆ ಉತ್ಸಾಹವಾಗಬೇಕು, ಎಂಬ ದೃಷ್ಟಿಯಿಂದ ಶ್ರೀಮತಿ ಅಮೃತಾ ಅವರು ಪ್ರತಿಷ್ಠಾನದಲ್ಲಿ "ತೀನಂಶ್ರೀ ಸ್ಮಾರಕ ಉಪನ್ಯಾಸ ದತ್ತಿ" ಯೊಂದನ್ನು ಸ್ಥಾಪಿಸಿದ್ದಾರೆ. ತೀನಂಶ್ರೀ ಅವರು ಆಸಕ್ತರಾಗಿದ್ದ ಯಾವುದೇ ವಿಷಯದ ಬಗ್ಗೆ ವಿದ್ವಾಂಸರೊಬ್ಬರ ಉಪನ್ಯಾಸವನ್ನು ನಡೆಸಬೇಕೆಂಬ ಅವರ ಆಶಯವನ್ನು ಪ್ರತಿಷ್ಠಾನವು 2014ರಿಂದಲು ನಡೆಸಿಕೊಂಡು ಬರುತ್ತಿದೆ.

**ಕಿರು ಪರಿಚಯ**
**ಶ್ರೀಮತಿ ಬಿ.ಜಿ.ಕುಸುಮ**

ವಿಜ್ಞಾನ ಶಿಕ್ಷಣದಲ್ಲಿ ಅತೀವ ಶ್ರದ್ಧೆ ಮತ್ತು ಕಲೆಯಲ್ಲಿ ಅಪಾರ ಆಸಕ್ತಿ ಇವೆರಡರ ಸಾಂಗತ್ಯಕ್ಕೆ ಬಿ.ಜಿ.ಕುಸುಮಾ ಅವರ ವ್ಯಕ್ತಿತ್ವವೇ ಒಂದು ಉತ್ತಮ ಉದಾಹರಣೆ. ಲೋಕದ ಆಗುಹೋಗುಗಳನ್ನು ವೈಚಾರಿಕ ದೃಷ್ಟಿಕೋನದಿಂದ ವಿಶ್ಲೇಷಿಸುವ ಎಚ್ಚರ ಮತ್ತು ಸಾಹಿತ್ಯ, ಸಂಗೀತ, ಗಮಕ ಇವುಗಳನ್ನು ಆಸ್ವಾದಿಸುವ ಸಂವೇದನೆ ಇವೆರಡರ ಹದವರಿತ ಮಿಶ್ರಣ ಅಲ್ಲಿ ಹಾಸುಹೊಕ್ಕಾಗಿದೆ.ಕಳೆದ ಇಪ್ಪತ್ತೈದು ವರ್ಷಗಳಿಂದಲೂ ಪ್ರತಿಫಲಾಪೇಕ್ಷೆಯಿಲ್ಲದೆ ಬೆಂಗಳೂರಿನಲ್ಲಿ ಮಕ್ಕಳಿಗೆ ಬೇಸಿಗೆ ವಿಜ್ಞಾನ ಶಿಬಿರಗಳನ್ನು ನಿರಂತರ ನಡೆಸುತ್ತಿರುವ ಅವರ ಬದ್ಧತೆ, ನಾಳೆಯ ಪೀಳಿಗೆಯಲ್ಲಿ ವೈಜ್ಞಾನಿಕ ಮನೋಭಾವವನ್ನು ಬಿತ್ತುವ ಹಂಬಲ ಹೊಂದಿದೆ. ಹಾಗೆಯೇ ಪ್ರಸಿದ್ಧ ಗಮಕಿಗಳ ಕಾವ್ಯವಾಚನಕ್ಕೆ ವ್ಯಾಖ್ಯಾನ ಮಾಡುವ ಅವರ ಆಸಕ್ತಿ, ಕನ್ನಡದ ಶ್ರೇಷ್ಠ ಕೃತಿಗಳ ಸಾರವನ್ನು ಶ್ರೀ ಸಾಮಾನ್ಯರಿಗೂ ತಲುಪಿಸುವ ಆಶಯ ಹೊಂದಿದೆ. ವಯಸ್ಸು ಎಂಬತ್ತು ದಾಟಿದ ನಂತರವೂ ಅವರಲ್ಲಿ ಈ ಹಂಬಲ ಮತ್ತು ಆಸಕ್ತಿ ಕುಂದದೇ ಉಳಿದಿವೆ ಎನ್ನುವುದೇ ಅವರ ಜೀವನೋತ್ಸಾಹವನ್ನು ಸಾರುತ್ತದೆ.

ಶಿಕ್ಷಕಿ, ಸಂಘಟಕಿ, ವಿಜ್ಞಾನ ಪ್ರಚಾರಕಿ, ಸಾಮಾಜಿಕ ಕಾರ್ಯಕರ್ತೆ ಮತ್ತು ಕಾವ್ಯವಾಚನ ವ್ಯಾಖ್ಯಾನಕಾರ್ತಿ ಕುಸುಮಾ ಅವರ ಚಿಂತನೆ ಸದಾ ಜನರ ಒಳಿತನ್ನು ಬಯಸುತ್ತದೆ. ಸಮಾಜದಲ್ಲಿ ಬಡ ಹೆಣ್ಣುಮಕ್ಕಳ ಶಿಕ್ಷಣ–ಕ್ಕೆ, ಮಹಿಳೆಯರ ಆರೋಗ್ಯ ರಕ್ಷಣೆಗೆ ಸ್ಪಂದಸಲೆಂದೇ ಅವರು ಒಂದು ಸಾಮಾಜಿಕ ಸೇವಾ ಟ್ರಸ್ಟ್ ಸ್ಥಾಪಿಸಿದ್ದಾರೆ. ಜನಸೇವೆ ಮಾಡುವ ಆಸ್ಪತ್ರೆಗಳ ಅಗತ್ಯಕ್ಕೆ ನೆರವಾಗುತ್ತಿದ್ದಾರೆ. ವಿಜ್ಞಾನ ವಿಷಯಗಳನ್ನು ಕುರಿತು ಸರಳ ಭಾಷೆಯಲ್ಲಿ ಲೇಖನಗಳನ್ನು ಬರೆಯುವ ಅವರು ಕನ್ನಡ ಮಹಾಕಾವ್ಯಗಳ ರಸಪ್ರಸಂಗಗಳನ್ನು ನಮ್ಮ ಮುಂದಿಟ್ಟದ್ದಾರೆ. ಮಕ್ಕಳ ಕಥೆಗಳ ಅವರ ಎರಡು ಸಂಗ್ರಹಗಳು.ಬದುಕಿಗೆ ಬೇಕಾದ ಸಂಗತಿಗಳನ್ನು ಅವರಿಗೆ ತಿಳಿಸಿಕೊಡುತ್ತವೆ. ಕುಸುಮಾ ಅವರ ಬಹುಮುಖ ಆಸಕ್ತಿಗೆ 'ವ್ಯಾಖ್ಯಾನ ವಿಶಾರದೆ' ಬಿರುದು. ಗಾರ್ಗಿ ಪ್ರಶಸ್ತಿ. ಎನ್‌ಸಿಇಆರ್‌ಟಿ ಪ್ರಶಸ್ತಿ ಮುಂತಾದವು ಸಂದಿವೆ.

**ಡಿಸೆಂಬರ್ ತಿಂಗಳಲ್ಲಿ ನಡೆಯುವ ಕಾರ್ಯಕ್ರಮಗಳ ದತ್ತಿ ವಿವರಗಳು**

| ಕ್ರ.ಸಂ | ಹೆಸರು | ಸ್ಥಾಪಕರು | ಸ್ಥಾಪನೆ |
|---|---|---|---|
| 1 | ಬೇಟೆರಾಯ ದೀಕ್ಷಿತ | ಪ್ರೊ. ಬಿ.ರಾಮಸ್ವಾಮಿ& ಸಾವಿತ್ರಮ್ಮ ರಾಮಸ್ವಾಮಿ | 1998 |
| 2 | ವಿ.ಸೀ. | ಪ್ರೊ. ಎಂ.ವೀ. ಸತ್ಯನಾರಾಯಣ ಮತ್ತು ಕುಟುಂಬದವರು | 1988 |
| 3 | ಶಾಂತಾ ಪ್ರಭುಶಂಕರ | ಡಾ. ಪ್ರಭುಶಂಕರ್ | 2000 |
| 4 | ವೆಂಕಟರಂಗಪ್ಪ | ಶ್ರೀ ಎ.ನರಸಿಂಹ ಮೂರ್ತಿ ಮತ್ತು ಕುಟುಂಬದವರು | |
| 5 | ಟಿ.ಎನ್. ಮಹದೇವಯ್ಯ | ಪ್ರೊ. ಬಿ. ವೀರಭದ್ರಯ್ಯ ಮತ್ತು ಅಭಿಮಾನಿಗಳು | 1996 |
| 6 | ಜಿ.ಪಿ.ರಾಜರತ್ನಂ ಮಾಸ್ತಿ ಅಯ್ಯಂಗಾರ್ | ಶ್ರೀಬಿ.ಎಸ್. ಗುಂಡೂರಾವ್ | 1984 |
| 7 | ರಾಮಚಂದ್ರ ಪಟವಾರಿ | ಪ್ರೊ. ಭೀಮಪ್ಪ ಆರ್. ಸುರಪುರ | 2005 |
| 8 | ಚಂದ್ರಶೇಖರ್ ಶರ್ಮಾ | ಶ್ರೀಮತಿ ಪದ್ಮಾ ಶರ್ಮಾ | 1980 |
| 9 | ಎಸ್. ಶ್ರೀಕಂಠಯ್ಯ | ಎಸ್. ರಾಮಚಂದ್ರ & ಆರ್. ಚಂದ್ರವತಿ | 1982 |
| 10 | ಪುಟ್ಟಚ್ಚಮ್ಮ ಸಾರಂಗಿ ವೆಂಕಟರಾಮಯ್ಯ ಪ್ರಶಸ್ತಿ | ಎಸ್.ವಿ. ಶ್ರೀನಿವಾಸ್‌ರಾವ್ ಮತ್ತು ಅನುಸೂಯ ರಾವ್ | 2009 |




## ತೊಗರಿ ನಮ್ಮದೇ ಅಥವಾ ಎರವಲು ತಂದದ್ದೆ?

ಪ್ರತಿನಿತ್ಯ ನಮ್ಮ ಮನೆಗಳಲ್ಲಿ ತೊಗರಿಯಿಲ್ಲದೆ ಅಡುಗೆಯೇ ಇಲ್ಲ; ಸಾರು, ಹುಳಿ, ತೊವ್ವೆ ಅಥವಾ ಹಬ್ಬದ ದಿನ ಒಬ್ಬಟ್ಟಿನ ಹೂರಣ ಇವೆಲ್ಲಕ್ಕೂ ನಾವು ಬಳಸುವುದು ತೊಗರಿ ಬೇಳೆಯನ್ನು, ಕೆಲವು ವೇಳೆ ಹಸಿ ತೊಗರಿ ಕಾಯನ್ನೂ ಹುಳಿ ಮಾಡಲು ಬಳಸುತ್ತೇವೆ. ಇದರಲ್ಲಿ ಹೆಚ್ಚು ಪ್ರೊಟೀನ್ ಇದೆ. ತೊಗರಿಗೆ ಸಸ್ಯವಿಜ್ಞಾನದಲ್ಲಿ ಲ್ಯಾಟಿನ್‌ನ Cajanuscajan ಎಂದು ಹೆಸರು. ಹಿಂದೆ ಇದನ್ನು ಆ ವಿಜ್ಞಾನದಲ್ಲಿ cajanusindicų ಅಥವಾ Cajanusindica ಎನ್ನುತ್ತಿದ್ದರು. ಇಂಗ್ಲಿಷಿನಲ್ಲಿ ಈ ಸಸ್ಯವನ್ನು pigeonpea ಎನ್ನುತ್ತಾರೆ. ಆದರೆ ಖ್ಯಾತ ಸಸ್ಯವಿಜ್ಞಾನಿಗಳಾಗಿದ್ದ ಬಿ.ಜಿ.ಎಲ್. ಸ್ವಾಮಿ ಅವರು ಇದು ನಮ್ಮ ದೇಶದ್ದಲ್ಲವೇ ಅಲ್ಲ ಎಂದು ವಾದಿಸಿದರು: ಮೂವತ್ತಮೂರು ವರ್ಷಗಳ ಹಿಂದೆ ಪ್ರಕಟವಾದ ತಮ್ಮ 'ತಮಿಳು ತಲೆಗಳ ನಡುವೆ' ಎಂಬ ಪುಸ್ತಕದಲ್ಲಿ, ಬೇರಾವುದೋ ಒಂದು ವಿಷಯದ ಬಗ್ಗೆ ಬರೆಯುತ್ತ ಅವರು ಇದು "ಆಫ್ರಿಕ ಖಂಡದಿಂದ ಪೋರ್ಚುಗೀಸರು ಕ್ರಿ.ಶ. ಹದಿನಾರನೆಯ ಶತಮಾನದಿಂದೀಚೆಗೆ ತಂದದ್ದು. ಅದು ಹೇಗೋ ನಮ್ಮ ನಾಲಗೆ ತೊಗರಿ ಬೇಳೆಯ ರುಚಿಗೆ ಒಗ್ಗಿಬಿಟ್ಟಿತು" ಎನ್ನುತ್ತಾರೆ. ಆದರೆ ಈ ಶಬ್ದದ ಬೆನ್ನು ಹತ್ತಿ ಹೋದಾಗ ಅದು ನಮ್ಮ ಪ್ರಾಚೀನ ಕನ್ನಡ ಗ್ರಂಥಗಳಲ್ಲಿಯೂ ಸಾಕಷ್ಟು ಬಳಕೆಯಲ್ಲಿದ್ದ ಶಬ್ದವೆಂದು ಗೊತ್ತಾಗುತ್ತದೆ.

ಈ ಶಬ್ದ ಕನ್ನಡದಲ್ಲಿ ತೊವರಿ, ತುವರಿ, ತೊಗರಿ ಎಂಬ ರೂಪಗಳಲ್ಲಿ ಬಳಕೆಯಾಗಿದೆ; ಈಗ ತೊಗರಿ ಎಂಬ ರೂಪ ಸಾರ್ವತ್ರಿಕವಾಗಿದೆ. ತಮಿಳಿನಲ್ಲಿ ತುವರೈ, ತುಳುವಿನಲ್ಲಿ ತೊಗರಿ ಅಥವಾ ತೊಗರೆ, ಮಲಯಾಳಂನಲ್ಲಿ ತೋರಿ ಹಾಗೂ ತೆಲುಗಿನಲ್ಲಿ ತೊಗರಿ, ತೊಗರು, ತೊಗರಿ ಎಂಬ ರೂಪಗಳಲ್ಲಿ ಬಳಕೆಯಲ್ಲಿದೆ (ಈ ಬೇಳೆಗೆ ತೆಲುಗಿನಲ್ಲಿ ಹೆಚ್ಚಾಗಿ ಬಳಕೆಯಲ್ಲಿರುವುದು ಕಂದುಲು ಎಂದು). "ಈ ಪಯಿರು ನಮ್ಮಲ್ಲಿದ್ದುದಾಗಿ ಸಾಹಿತ್ಯದಲ್ಲಾಗಲೀ ಶಾಸನದಲ್ಲಾಗಲೀ ದಾಖಲೆಯಲ್ಲಿಲ್ಲ" ಎಂದಿದ್ದಾರೆ ಸ್ವಾಮಿ ಅವರು. ಆದರೆ ಕ್ರಿ.ಶ. 1025 ರಲ್ಲಿ ರಚಿತವಾದ ಚಾವುಂಡರಾಯನ 'ಲೋಕೋಪಕಾರಂ' ಗ್ರಂಥದಲ್ಲಿನ 'ಸೂಪಶಾಸ್ತ್ರಂ' ಎಂಬ ಅಧ್ಯಾಯದಲ್ಲಲ್ಲದಿದ್ದರೂ 'ನರಾದಿವೈದ್ಯಪ್ರಕರಣಂ' ಎಂಬ ಅಧ್ಯಾಯದಲ್ಲಿ "ತೊವರಿ ಗೋದುವೆ ಜೋಳಮುದ್ಗ ಪೆಸಱ್ ಮಸೂರಿಗೆ ಗುಂಜಿಯೆಂಬಿವಱೊಂದಱೊಳಾದ ತೈಲ"ವನ್ನು ವಿಶಿಷ್ಟ ರೀತಿಯಲ್ಲಿ ಮಾಡಿ ಹಚ್ಚಿದರೆ ತುರಿ ವಾಸಿಯಾಗುತ್ತದೆ ಎಂದಿದ್ದಾನೆ. ಇಲ್ಲಿ ತೊವರಿ ಧಾನ್ಯ ಎಂಬುದು ಸ್ಪಷ್ಟವಾಗಿದೆ. ಸ್ವಾಮಿಯವರು "ಸೂಪಶಾಸ್ತ್ರಗಳಲ್ಲೂ ಇದರ ಉಲ್ಲೇಖವಿಲ್ಲ" ಎಂದಿದ್ದಾರೆ. ಆದರೆ ಎರಡನೇ ನಾಗವರ್ಮನು (ಇವನ ಕಾಲವೂ ಹನ್ನೊಂದನೇ ಶತಮಾನ) 'ಕಾವ್ಯಾವಲೋಕನ' ಎಂಬ ತನ್ನ ಗ್ರಂಥದಲ್ಲಿನ 'ಶಬ್ದಸ್ಮೃತಿ' ಎಂಬ ಭಾಗದ ವ್ಯಾಕರಣ ಸೂತ್ರವೊಂದಕ್ಕೆ ಉದಾಹರಣೆಯಾಗಿ ನೀಡಿರುವ (ತನಗಿಂತ ಹಿಂದೆ ಇದ್ದ ಗ್ರಂಥವೊಂದರಿಂದ ಆಯ್ದ) ಪದ್ಯ ಹೀಗಿದೆ: "ತುಟಿಕಲಡುಗೆಗಳೊಳೇಂ ಪಟಿಗಟಿವೆಯ ಕೂಟ್ ತಿವುಡುಗಟಿದ ತೊವರಿಯ ತೊವೆ ಕಾಯ್ದಿಟಿಪಿದ ತುಪ್ಪಂ ಕೋಡುವ ಕಟಿಲಲ್ಲದೆ ದಿವ್ಯಭೋಜನಂ ಪೆಱತುಂಟೇ" (ರುಚಿಯಿಲ್ಲದ ಅಡುಗೆಯಿಂದೇನು, ಹಳೆಯ ಅಕ್ಕಿಯಿಂದ ಮಾಡಿದ ಅನ್ನ, ಹೊಟ್ಟು ತೆಗೆದ ತೊಗರಿ [ಬೇಳೆಯ] ತೊವ್ವೆ, ಕಾಸಿದ ತುಪ್ಪ ಹಾಗೂ ತಂಪಾದ ಮೊಸರಲ್ಲದೆ ಬೇರೆ ಒಳ್ಳೆಯ ಊಟವಿದೆಯೇ!) ಎಂದು ಬಾಯಿ ಚಪ್ಪರಿಸುತ್ತ ಕೇಳುತ್ತಾನೆ. (ಈ ಪದ್ಯ ಹದಿಮೂರನೇ ಶತಮಾನದ 'ಸೂಕ್ತಿಸುಧಾರ್ಣವ' ಎಂಬ ಗ್ರಂಥದಲ್ಲೂ ಇದೆ). ಇದೇ ನಾಗವರ್ಮನ ಇನ್ನೊಂದು ಕೃತಿ 'ಅಭಿಧಾನ ವಸ್ತುಕೋಶ' ಎಂಬ ನಿಘಂಟುವಿನಲ್ಲಿ 'ತುವರ್ಯಾಢಕಿ' (ತುವರಿ=ಆಢಕಿ) ಎಂದು ಸಮಾನಾರ್ಥಕಗಳಾಗಿ ಕೊಡುತ್ತಾನೆ. ಅಂದರೆ ಒಬ್ಬನೇ ತೊವರಿ, ತುವರಿ ಎರಡೂ ರೂಪಗಳನ್ನು ಬಳಸುತ್ತಾನೆ.

ತೊಗರಿ ಎಂಬ ರೂಪವೂ ಹಿಂದಿನ ಕಾಲದಿಂದಲೇ ಬಳಕೆಯಲ್ಲಿದೆ; ಕ್ರಿ.ಶ. 1159 ರ ಒಂದು ಶಾಸನದಲ್ಲಿ "ದೇವರ್ಗ್ಗೆ .. .. ಕಡಲೆ ತೊಗರಿಯಾದಿಯಾಗಿ ಸಲುವುದು" ಎಂದಿದೆ. ಹದಿಮೂರನೆಯ ಶತಮಾನದ ಪ್ರಸಿದ್ಧ ಕವಿ ಹರಿಹರನ 'ಬಸವರಾಜದೇವರರಗಳೆ'ಯಲ್ಲಿ ರಾಶಿಗಟ್ಟಲೆ ಕನಕರತ್ನಗಳನ್ನು ಬೇಡಿ ಬಸವಣ್ಣನನ್ನು ಪರೀಕ್ಷಿಸಲು ಬಂದ ಮಹದೇವಿಸೆಟ್ಟಿ ಎಂಬುವವನು ಅವನನ್ನು ಕಂಡೊಡನೆ ತಾನೇ ಬೆದರಿ "ಮೂವತ್ತೆತ್ತಿನೊಳ್ ಜೋಳದಕ್ಕಿ ಕಡಲೆ ತೊಗರಿಗಳಂ ತೀವೆ ಕೊಡುವುದು" ಎಂದು ಕೇಳುತ್ತಾನೆಂಬ ಪ್ರಸಂಗವಿದೆ. ಕ್ರಿ. ಶ. ಹದಿನೈದನೆಯ ಶತಮಾನದ ಮೂರನೆಯ ಮಂಗರಾಜನೆಂಬ ಕವಿ ಮಿಕ್ಕ ಗ್ರಂಥಗಳ ಜೊತೆಗೆ 'ಸೂಪಶಾಸ್ತ್ರ'ವೊಂದನ್ನೂ (ಅಡುಗೆ ಕಲೆ) ಬರೆದಿದ್ದಾನೆ. ಆದರೆ ತನ್ನ ಬೇರೊಂದು ಕಾವ್ಯವಾದ 'ನೇಮಿಜಿನೇಶ ಸಂಗತಿ'ಯಲ್ಲಿ "ಸಣ್ಣಗಳ ಮೇಲೋಗರ ತೊಗರಿಯ ತೋವೆ ಬೆಣ್ಣೆಗಾಸಿದ ತುಪ್ಪವೆಱೆದು ಅಣ್ಣಂದಿರಂ ಬನ್ನಿ" ಎಂದು ಕರೆಯುವ ಉಲ್ಲೇಖವಿದೆ. ಹೀಗೆಯೇ ಆನಂತರದ ಗ್ರಂಥಗಳಲ್ಲಿಯೂ ಈ ಬೇಳೆಯ ಉಲ್ಲೇಖ ಸ್ಪಷ್ಟವಾಗಿದೆ; ಅದು ವ್ಯಾಪಕವಾಗಿ ಬಳಕೆಯಲ್ಲಿತ್ತೆಂಬುದಕ್ಕೆ ಸಾಕ್ಷಿಯಾಗಿದೆ.

ಸ್ವಾಮಿಯವರು ತಮ್ಮ ಲೇಖನದಲ್ಲಿ "ಸಂಸ್ಕೃತದ ತುಬರಿಕಾ ಎಂಬ ಸಮಾನಾರ್ಥದ ಪದ ಈಚೀಚೆಗೆ ಹುಟ್ಟಿಕೊಂಡದ್ದು" ಎನ್ನುತ್ತಾರೆ. ಆದರೆ ತುವರೀ ಮತ್ತು ತುವರಿಕಾ ಎಂಬ ಶಬ್ದಗಳು 'ಅಮರಕೋಶ'ದಲ್ಲಿ ಸಿಕ್ಕುತ್ತವೆ. ಹಿಂದೆ ಅದಕ್ಕೆ 'ಆಢಕಿ' ಎಂಬ ಹೆಸರೂ ಇತ್ತು. ನಾಗವರ್ಮ ತುವರಿಗೆ ಆಢಕಿಯನ್ನು ಸಮಾನಾರ್ಥಕವಾಗಿ ಹೇಳಿರುವುದನ್ನು ಈ ಹಿಂದೆಯೇ ಗಮನಿಸಿದ್ದೇವೆ. ಸರ್ ಮೊನಿಯೇರ್ ವಿಲಿಯಮ್ಸ್ ಅವರು ತಮ್ಮ ಸಂಸ್ಕೃತ–ಇಂಗ್ಲಿಷ್ ನಿಘಂಟುವಿನಲ್ಲಿ ಆಢಕ ಶಬ್ದವನ್ನು ಕೊಟ್ಟು ಅದಕ್ಕೆ the pulse Cajanus Indicus Spreng ಎಂಬ ಅರ್ಥವನ್ನಿತ್ತು, ಈ ಶಬ್ದದ ಆಕರವೆಂದು ಸುಶ್ರುತ ಸಂಹಿತೆಯನ್ನು ಉಲ್ಲೇಖಿಸುತ್ತಾರೆ. ಭಾರತ ಸರ್ಕಾರದದ 'ಆಯುರ್ವೇದಿಕ್ ಫಾರ್ಮಕೋಪಿಯ ಆಫ್ ಇಂಡಿಯ'ದಲ್ಲಿ ಆಢಕಿಯಿಂದ ಕಿಂಕಾಯಣ ಘುಟಿಕಾ ಎಂಬ ಔಷಧಿಯನ್ನು ತಯಾರಿಸುವ ಬಗ್ಗೆ ವಿವರವಿದೆ.

ತೊಗರಿಯಲ್ಲಿ ಎರಡು ಪ್ರಭೇದಗಳ ಉಲ್ಲೇಖವೂ ನಮ್ಮ ಬರವಣಿಗೆ ಮತ್ತು ಆಡುಮಾತುಗಳಲ್ಲಿ ರೂಢಿಯಲ್ಲಿದೆ. ಅವೆಂದರೆ ಅಚ್ಚತೊಗರಿ ಮತ್ತು ಕಾಡು ತೊಗರಿ.ವಿಶೇಷಣಗಳೇ ಸೂಚಿಸುವಂತೆ ಇವು ಹೊಲದಲ್ಲಿ ಬೆಳೆದ ಹಾಗೂ ಕಾಡಿನಲ್ಲಿ ಬೇಸಾಯವಿಲ್ಲದೆ ಬೆಳೆದ ಪ್ರಭೇದಗಳನ್ನು ಸೂಚಿಸುತ್ತವೆ. (ಕಾಡುತೊಗರಿ ಎಂಬುಕ್ಕೆ ಕಿಟೆಲ್ Atylosiacandollei ಎಂಬ ಲ್ಯಾಟಿನ್ ಸಸ್ಯವೈಜ್ಞಾನಿಕ ಹೆಸರು ನೀಡುತ್ತಾರೆ). ತೆಲುಗಿನಲ್ಲಿ ಇವನ್ನು ಕೊಂಡಕಂದುಲು ಮತ್ತು ಪೊಟ್ಟಿಕಂದುಲು ಎನ್ನುತ್ತಾರೆ. ದ್ರಾವಿಡ ಭಾಷೆಗಳಲ್ಲಿ ಒಂದಾದ ತೊದವ (ತೋಡ)ದಲ್ಲಿ ತಿಫಿನಿ ಎಂಬುದು ಕಾಡು ತೊಗರಿಗಿರುವ ಹೆಸರೆಂದು (Atylosiacandollei) ಟಿ. ಬರೋ ಮತ್ತು ಎಂ. ಬಿ ಎಮೆನೂ ತಮ್ಮ 'ಎ ದ್ರವಿಡಿಯನ್ ಎಟಿಮೊಲಾಜಿಕಲ್ ಡಿಕ್ಷನರಿ'ಯಲ್ಲಿ ಹೇಳುತ್ತಾರೆ. ಅಲ್ಲದೆ ತೊಗರಿಯ ಗಿಡವು ಹೊಲಗಳಲ್ಲಿ ಚಿಕ್ಕ ಪೊದೆಯಂತೆ ಬೆಳೆವುದನ್ನೂ, ಮರದ ಹಾಗೆ ಬೆಳೆಯುವ ಪ್ರಭೇದವನ್ನೂ ನಾವು ನೋಡಿದ್ದೇವೆ.

ಸಸ್ಯವಿಜ್ಞಾನದಲ್ಲಿ ಇದರ ಬಗ್ಗೆ ಏನಿದೆಯೆಂದು ಪುಟಗಳನ್ನು ತಿರುವಿ ಹಾಕಿದಾಗ ಅನೇಕ ಕುತೂಹಲಕಾರಿ ಅಂಶಗಳು ಬೆಳಕಿಗೆ ಬಂದವು. ಇದರಲ್ಲಿ ಬೇಸಾಯ ಮಾಡುವ ಮತ್ತು ತಾನಾಗಿ ಬೆಳೆಯುವ Cajanus ಜಾತಿಯ ಮೂವತ್ತೆರಡು ಬಗೆಗಳನ್ನು ಸಸ್ಯಶಾಸ್ತ್ರಜ್ಞರು ಗುರುತಿಸುತ್ತಾರೆ.ಭಾರತ ಆಫ್ರಿಕದಂತಹ ಉಷ್ಣವಲಯವು ಇದರ ತವರು ತಾಣ. ಬರ್ಕ್‌ಹಿಲ್ ಎಂಬುವವರು ಭಾರತದ ಈ ಸಸ್ಯ ಕ್ರಿ.ಪೂ. ಮೂರನೆಯ ಶತಮಾನದ ಹೊತ್ತಿಗೆ ಮಲಯಕ್ಕೆ ಹೋಯಿತು, ಆನಂತರ ಇತರೆಡೆಗಳಿಗೆ ಹಬ್ಬಿತು ಎನ್ನುತ್ತಾರೆ. ಮೊದಲು ಇದು ಪ್ರಾಯಶಃ ಹೆಚ್ಚು ಬೆಳೆಯುತ್ತಿದ್ದುದು ದಕ್ಷಿಣ ಭಾರತದಲ್ಲೇ ಇರಬಹುದು. ಹಲವಾರು ಸ್ವತಂತ್ರ ಭಾಷೆಗಳಗಿ ಬೇರ್ಪಡುವ ಮುನ್ನ ಕ್ರಿ.ಪೂ. ಆರನೆಯ ಶತಮಾನದ ಹೊತ್ತಿಗಿದ್ದ ದ್ರಾವಿಡ ಭಾಷಾ ಸ್ವರೂಪವನ್ನು ಮೂಲದ್ರಾವಿಡ (Proto-Dravidian) ಎಂದು ಭಾಷಾವಿಜ್ಞಾನಿಗಳು ಕರೆಯುವುದು ರೂಢಿ. ಸುಪ್ರಸಿದ್ಧ ದ್ರಾವಿಡ ಭಾಷಾವಿಜ್ಞಾನಿಗಳಾಗಿದ್ದ ಭದ್ರಮರಾಜು ಕೃಷ್ಣಮೂರ್ತಿ ಅವರು ಮೂಲ ದ್ರಾವಿಡದಲ್ಲಿ ತೊಗರಿಗೆ 'ತುವರ್' ಎಂಬ ರೂಪವಿದ್ದಿರಬೇಕೆಂದು ಅದನ್ನು ಪುನಾರಚಿಸಿರುವುದಾಗಿ 'Proto-Dravidian Agriculture' ಎಂಬ ತಮ್ಮ ಸಂಶೋಧನ ಲೇಖನದಲ್ಲಿ ಎಫ್.ಸಿ.ಸೌತ್‌ವರ್ತ್ ಎಂಬುವವರು ಉಲ್ಲೇಖಿಸುತ್ತಾರೆ.

ಸ್ವಾಮಿಯವರು ಹೇಳುವಂತೆ ತೊಗರಿ ಕೆಲವರಲ್ಲಿ ಶ್ರಾದ್ಧಕರ್ಮಗಳಲ್ಲಿ ನಿಷಿದ್ಧವಿರಬಹುದು. (ಹೀಗೆ ನಿಷಿದ್ಧಗೊಳ್ಳುವ ಧಾನ್ಯ ತರಕಾರಿಗಳನ್ನು 'ವಿಶ್ವಾಮಿತ್ರ ಸೃಷ್ಟಿ' ಎಂದು ಹೇಳುವುದನ್ನು ಕೇಳಿದ್ದೇವೆ, ಅಂದರೆ ಅವು 'ಬ್ರಹ್ಮಸೃಷ್ಟಿ'ಯಲ್ಲ, ಅರ್ಥಾತ್ ಸ್ಥಳೀಯವಾದದ್ದಲ್ಲ ಎಂಬುದು). ಆದರೆ ಅದಕ್ಕೆ ಕಾರಣ ಏನೋ ತಿಳಿಯದು. ಇಷ್ಟನ್ನು ಬಿಟ್ಟರೆ ತೊಗರಿ ನಮ್ಮದೇ, ಎರವಲು ತಂದದ್ದಲ್ಲ ಎಂಬುದು ರುಜುವಾತಾಗುತ್ತದೆ.

# ಸೇವಾ ಶುಲ್ಕ ಕಡಿತ

ಸಂಘ ಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲು ಅನುಕೂಲ ಮಾಡಿಕೊಡಲು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಭಾಂಗಣಗಳ ಸೇವಾ ಶುಲ್ಕಗಳನ್ನು ಗಣನೀಯವಾಗಿ ಕಡಿತಗೊಳಿಸಲಾಗಿದೆ

ಸಭಾಂಗಣಗಳ ಸೇವಾ ಶುಲ್ಕವನ್ನು ದಿನಾಂಕ 1–6–2017ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪರಿಷ್ಕರಿಸಲಾಗಿದೆ. ಬಳಕೆದಾರರು ಎಂದಿನಂತೆ ಸಹಕರಿಸಬೇಕಾಗಿ ಕೋರಿಕೆ.

**ಸಭಾಂಗಣಗಳ ಸೇವಾ ಶುಲ್ಕದ ವಿವರ**

| | ಎಂವಿಸೀ ಸಭಾಂಗಣ | ಶಾ.ಬಾಲೂರಾವ್ ಮಾತಿನಮನೆ | ತರಗತಿ ಕೊಠಡಿ |
|---|---|---|---|
| **1) ಸೋಮವಾರದಿಂದ ಶುಕ್ರವಾರದವರೆಗೆ** | | | |
| ಬೆಳಿಗ್ಗೆ 10–30 ರಿಂದ 2–00ರ ವರೆಗೆ ಅಥವಾ | 1,000 | 500 | 500 |
| ಮಧ್ಯಾಹ್ನ 3–30 ರಿಂದ 7–00ರ ವರೆಗೆ | 1,000 | 500 | 500 |
| ಬೆಳಿಗ್ಗೆ 10–30 ರಿಂದ ಸಂಜೆ 7–00ರ ವರೆಗೆ | 2,000 | 1,000 | 1,000 |
| **2) ಶನಿವಾರ, ಭಾನುವಾರ ಹಾಗೂ ಸರ್ಕಾರಿ ರಜಾ ದಿನಗಳಲ್ಲಿ** | | | |
| ಬೆಳಿಗ್ಗೆ 10–30 ರಿಂದ 2–00ರ ವರೆಗೆ ಅಥವಾ | 2,500 | 1,000 | 1,000 |
| ಮಧ್ಯಾಹ್ನ 2–00 ರಿಂದ 5–00ರ ವರೆಗೆ | 2,500 | 1,000 | 1,000 |
| ಬೆಳಿಗ್ಗೆ 10–30 ರಿಂದ ಸಂಜೆ 5–00ರ ವರೆಗೆ | 5,000 | 2,000 | 2,000 |

ವಿ.ಸೂಚನೆ: ಎಲ್.ಇ.ಡಿ. ಪ್ರೊಜೆಕ್ಟರ್ ಬಳಕೆಗೆ ರೂ. 250/– ಪ್ರತಿ 3 1/2 ಘಂಟೆಗಳ ಬಳಕೆಗೆ ಹೆಚ್ಚುವರಿ ಶುಲ್ಕ

ಹವಾ ನಿಯಂತ್ರಕ ವ್ಯವಸ್ಥೆ ಬಳಕೆಗೆ ರೂ. 250/– ಪ್ರತಿ 3 1/2 ಘಂಟೆಗಳ ಬಳಕೆಗೆಹೆಚ್ಚುವರಿ ಶುಲ್ಕ

ಸಭಾಂಗಣ ಶುಲ್ಕವನ್ನು ಪೂರ್ಣವಾಗಿ ಪಾವತಿಸಿ ಸಭಾಂಗಣವನ್ನು ಕಾಯ್ದಿರಿಸುವುದು. ಅಲ್ಲದೆ ರೂ. 1,000/–(ರೂ.ಒಂದು ಸಾವಿರ)ವನ್ನು ಮುಂಗಡವಾಗಿ ಕೊಡತಕ್ಕದ್ದು. ಮುಂಗಡ ಹಣವನ್ನು ಕಾರ್ಯಕ್ರಮದ ನಂತರ ಹಿಂತಿರುಗಿಸಲಾಗುವುದು.

ವಿ.ಸೂ : 1) ತಿಂಡಿ–ಪಾನೀಯಗಳನ್ನು ಸಭಾಂಗಣದೊಳಗೆ ಸೇವಿಸಲು ಅನುಮತಿ ಇಲ್ಲ.

2) ಸಭಾಂಗಣಗಳ ಆಸ್ತಿ ಪಾಸ್ತಿಗಳಿಗೆ ಹಾನಿಯಾದಲ್ಲಿ ಸಂಘಟಕರು ಜವಾಬ್ದಾರಿ ವಹಿಸಿಕೊಳ್ಳತಕ್ಕದ್ದು.

3) ಸಂಘಸಂಸ್ಥೆಗಳು ನಡೆಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಮಾತ್ರ ಎಂ.ವಿ.ಸೀ. ಸಭಾಂಗಣವನ್ನು ನೀಡಲಾಗುವುದು.

4) ಕೌಟುಂಬಿಕ ಕಾರ್ಯಕ್ರಮಗಳಿಗೆ ಸಭಾಂಗಣಗಳನ್ನು ನೀಡಲಾಗುವುದಿಲ್ಲ.

## ಅಕ್ಕರ ಗೊಟ್ಟಿ ಪದ್ಯ

ಒಗೆದ ಸುತ ಶೋಕದಿಂದಾ
ವಗೆಯಂತೊಳಗುರಿಯೆ ಭೋಂಕನೆರ್ದೆ ತೆಜೆಯಲ್ ಹಾ
ಮಗನೇ ಎಂದಶ್ರುಜಲಾ
ರ್ದ್ರ ಗಂಡನಾ ಗಂಡಿನೊಡನೆ ಬಿಸುಟಂ ಬಿಲ್ಲಂ

ಈ ಪದ್ಯವು ಪಂಪಭಾರತಕ್ಕೆ ಸೇರಿದ್ದಾಗಿದೆ.

## ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನದ ಗ್ರಂಥಾಲಯದಲ್ಲಿರುವ ಗ್ರಂಥಗಳ ಮರುಪರಿಶೀಲನೆ ನಡೆಯುತ್ತಿದೆ. ಹಲವಾರು ಪುಸ್ತಕಗಳ ಹೆಚ್ಚುವರಿ ಪ್ರತಿಗಳನ್ನುಗುರುತಿಸಿ ಬೇರ್ಪಡಿಸುವ ಕಾರ್ಯಗಳು ಭರದಿಂದ ಸಾಗುತ್ತಿದ. ಇವುಗಳಲ್ಲಿ ಬಹಳಷ್ಟು ಮೌಲಿಕ ಗ್ರಂಥಗಳಾಗಿರುತ್ತವೆ. ಇವುಗಳನ್ನು ಶಾಲಾ ಕಾಲೇಜು ಹಾಗೂ ಇತರ ಸಂಘ ಸಂಸ್ಥೆಗಳಿಗೆ ಮಾತ್ರ ಉಚಿತವಾಗಿ ನೀಡಲಾಗುತ್ತಿದೆ. ವಿವರಗಳಿಗಾಗಿ ಸಂಪರ್ಕಿಸಿ : ಗೌ. ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ

## ಕೋರಿಕೆ :

**ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.**

## ದತ್ತಿಗಳ ಪರಿಚಯ

### 'ಜಿ. ಪಿ.ರಾಜರತ್ನಂ'(೧೯೦೪–೧೯೭೯)



ಮೈಸೂರು, ಬೆಂಗಳೂರು, ಶಿವಮೊಗ್ಗ, ತುಮಕೂರುಗಳಲ್ಲಿ ಅಧ್ಯಾಪಕರಾಗಿದ್ದರು. "ಭ್ರಮರ" ಎಂಬುದು ಇವರ ಕಾವ್ಯನಾಮವಾಗಿತ್ತು.

* "ರತ್ನನ ಪದಗಳು" ರಾಜರತ್ನಂ ಅವರ ವಿಶಿಷ್ಟ ಕೊಡುಗೆ. ಇದರಲ್ಲಿ ಅವರ ಜೀವನ ದರ್ಶನವಿದೆ. 'ಕುಡುಕ' ನೆಂಬ ಹೀಯಾಳಿಕೆಗೆ ಗುರಿಯಾದ ಬಡವನೊಬ್ಬನ ಕಾಣ್ಕೆ, ನೋವು, ನಲಿವು, ಒಲವು, ಗೆಲವು, ಸೋಲು ಎಲ್ಲಾ ಈ ಕಾವ್ಯದಲ್ಲಿ ಮೈದುಂಬಿವೆ.
* "ಹೆಂಡ ಹೆಂಡ್ತಿ ಕನ್ನಡ ಪದಗಳ್ ಅಂದ್ರೆ ರತ್ನಂಗೆ ಪ್ರಾಣ" ಇದರಲ್ಲಿ ಕನ್ನಡದ ಬಗೆಗಿನ ವಿಶೇಷ ಅಭಿಮಾನ, ಅನನ್ಯತೆ, ಆಪ್ತತೆ, ಆಪ್ಯಾಮಾನತೆ ಕವನದುದ್ದಕ್ಕೂ ಹಾಸುಹೊಕ್ಕಾಗಿದೆ.
* 'ಬಣ್ಣದ ತಗಡಿನ ತುತ್ತೂರಿ, ಕಾಸಿಗೆ ಕೊಂಡನು ಕಸ್ತೂರಿ' ಎಂಬ ಶಿಶು ಗೀತೆಯಿಂದ, ಎಂಡಕುಡುಕ ರತ್ನನ ಪದಗಳನ್ನಲ್ಲದೆ ನೂರಾರು ಕೃತಿಗಳನ್ನು ರಚಿಸಿ ಕನ್ನಡ ಕಾಯ್ದು, ಬೋಧಿಸಿ 'ಮೇಷ್ಟ್ರು' ಆಗಿ ಹೆಸರಾದವರು.
* ಹಲವು ಪ್ರಕಾರಗಳಲ್ಲಿ ಸುಮಾರು ೨೯೫ ಗ್ರಂಥಗಳನ್ನು ರಚಿಸಿರುವ ರಾಜರತ್ನಂರವರ ಸಾಧನೆ ಅದ್ವಿತೀಯವಾದುದು. ಕೊನೆ ತನಕ ಚಪ್ಪಲಿ ಹಾಕದೆ ನಡೆದ, ಹಲ್ಲು ಕಟ್ಟಿಸಿಕೊಳ್ಳಲು ಒಪ್ಪದ, ಬಿಳಿ ಪಂಚೆ ಬನಿಯನ್ ಗಳಲ್ಲಿಯೇ ಕಾಲ ಕಳೆದ ರಾಜರತ್ನಂ ಅತ್ಯಂತ ಸರಳ ಜೀವಿಯಾಗಿದ್ದರು.
* ಗೌತಮಬುದ್ಧ' ಎಂಬ ಕೃತಿ, ಪಠ್ಯಪುಸ್ತಕವಾಗಿ ಆಯ್ಕೆಯಾಗಿತ್ತು.

ಈ ದತ್ತಿಯನ್ನು ಶ್ರೀ ಮಾಸ್ತಿ ವೆಂಕಟೇಶ ಐಯ್ಯಂಗಾರ್ ಅವರೂ ನೀಡಿರುವ ಕೊಡುಗೆಯಿಂದ ಸ್ಥಾಪಿಸಲಾಗಿದೆ.


**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-11-2017**


## ೨೦೧೭ ನವೆಂಬರ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ನವೆಂಬರ್ ತಿಂಗಳಿನಲ್ಲಿ ೬ ಗ್ರಂಥಗಳ ಶುಷ್ಕ ಶುದ್ಧೀಕರಣ, ೧೦ ಮಸಿ+ತೈಲ, ೧೦ ಗ್ರಂಥ ಪತ್ರಗಳ ಮರುಜೋಡಣೆ ಕಾರ್ಯ, ೪ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ ೨ ಗ್ರಂಥಗಳಿಗೆ ಬಟ್ಟೆ ಸುತ್ತುವ ಕಾರ್ಯ , ಮತ್ತು ೬ ಗ್ರಂಥಗಳಿಗೆ ಸೂಚಿಯನ್ನು ಮಾಡಲಾಗಿದೆ.

## ವೀ. ಸೀತಾರಾಮಯ್ಯ



೧೮೯೯ರ ಅಕ್ಟೋಬರ – ೧೨ ಮಾರ್ಚ್ ೧೯೯೦, ೧೯೨೩ ರಿಂದ ೧೯೨೮ ರವರೆಗೆ ಮೈಸೂರಿನ ಶಾರದಾವಿಲಾಸ ಪ್ರೌಢಶಾಲೆಯಲ್ಲಿ ಉಪಾದ್ಯಾಯರಾಗಿದ್ದರು. ೧೯೨೮ ರಿಂದ ೧೯೫೫ ರವರೆಗೆ ವಿವಿಧ ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾದರು. ೧೯೫೬ರಿಂದ ೧೯೫೮ರ ವರೆಗೆ ಬೆಂಗಳೂರು ಆಕಾಶವಾಣಿ ನಿಲಯದ ಭಾಷಣ ವಿಭಾಗದ ಮುಖ್ಯಸ್ಥರಾಗಿದ್ದರು. ೧೯೬೪ರಿಂದ ೧೯೬೮ರವರೆಗೆ ಹೊನ್ನಾವರ ಕಾಲೇಜಿನ ಪ್ರಾಂಶುಪಾಲರಾಗಿದ್ದರು. ೧೯೫೪ ರಲ್ಲಿ ಕುಮಟೆಯಲ್ಲಿ ಜರುಗಿದ ೩೬ ನೆಯ ಸಾಹಿತ್ಯಸಮ್ಮೇಳನಕ್ಕೆ ವಿ.ಸೀ.ಯವರು ಅಧ್ಯಕ್ಷರಾಗಿದ್ದರು.

೧೦೦ ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ.


**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath


**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ..................................................................................

..........................................................................................

..........................................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭